ಡಾ|| ಹೆಚ್. ಎಸ್. ಉಷಾರಾಣಿ

# ವೀರ ಸೋಮೇಶ್ವರನ ಕುಂಜೇಶ್ವರ ದೇವಾಲಯ ಶಾಸನ ಒಂದು ಹೊಸ ದೃಷ್ಟಿ

ಅರಸೀಕೆರೆ ತಾಲೂಕಿನ ಹಿರಿಯೂರು ಗ್ರಾಮದ ಕುಂಜೇಶ್ವರ ದೇವಾಲಯದಲ್ಲಿ ಎರಡು ಪ್ರಕಟಿತ ಶಾಸನಗಳಿವೆ. ಒಂದು ವೀರ ಸೋಮೇಶ್ವರನ ಕಾಲದ್ದು, ಮತ್ತೊಂದು ವೀರ ನರಸಿಂಹನ ಕಾಲಕ್ಕೆ ಸೇರಿದುದಾಗಿದೆ. ವೀರ ಸೋಮೇಶ್ವರನ ಶಾಸನದಲ್ಲಿ (ಎಕ ೫, ಅರಸೀಕೆರೆ ೧೦೮) ಉಲ್ಲೇಖಿಸಲಾಗಿರುವ ಗಣಕುಮಾರಿ ಹಾಗೂ ವಿಭೂತಿಪಟ್ಟ ಎಂಬ ಪದಗಳು ಸ್ತ್ರೀ ಅಧ್ಯಯನ ದೃಷ್ಟಿಯಿಂದ ಗಮನಾರ್ಹ.

ಶ್ರೀ ಮನ್ಮಹಾವಡ್ಡವ್ಯವಹಾರಿ ಕಂಡನಂಬಿ ಸೆಟ್ಟಿ ತನ್ನ ಮಗ ಕುಂಜನ ಹೆಸರಿನಲ್ಲಿ ಕಲ್ಲ ಶಿವಾಲಯವ ಎತ್ತಿಸಿದ. ಈ ಕುಂಜೇಶ್ವರ ದೇವಾಲಯಕ್ಕೆ ಗ್ರಾಮದವರು ದತ್ತಿ ಬಿಟ್ಟರು. ಅದನ್ನು ಗಣಕುಮಾರಿ ಚಂದವ್ವೆಗೆ ವಹಿಸಲಾಯಿತೆಂದು ಶಾಸನದಲ್ಲಿ ಹೇಳಲಾಗಿದೆ.

ಗಣಕುಮಾರಿ ಚಂದವ್ವೆ ಯಾರು ? ಸಾಮಾನ್ಯವಾಗಿ ವೀರಶೈವ ಶರಣೆಯರಿಗೆ ಸಂಬಂಧಿಸಿದಂತೆ ಗಣಕುಮಾರಿ ಎಂಬ ಪದ ಪ್ರಯೋಗಿಸಲ್ಪಟ್ಟಿರುತ್ತದೆ. ಹಾಗಾಗಿ ಚಂದವ್ವೆ ಅಂತಹ ಸಂಪ್ರದಾಯಕ್ಕೆ ಸೇರಿದವಳೆಂದು ಭಾವಿಸುವುದು ಸಹಜ. ಆದರೆ ಈಕೆ ವರ್ತಕ ಶ್ರೇಣಿಗಳ ಸಮುದಾಯಕ್ಕೆ ಸೇರಿದವಳಾಗಿದ್ದು ಶ್ರೀ ಮನ್ಮಹಾವಡ್ಡವ್ಯವಹಾರಿ ಕಂಡನಂಬಿಸೆಟ್ಟಿಯ ಮಗಳು ಎಂದಿದೆ. ಕಂಡನಂಬಿ ಸೆಟ್ಟಿಯನ್ನು ಸ್ತ್ರೀ ವಂಶಾವಳಿಯ ಹಿನ್ನಲೆಯಲ್ಲಿ ಗುರುತಿಸಲಾಗಿದೆ. ಶಾಸನದಲ್ಲಿ ಕಂಡನಂಬಿಸೆಟ್ಟಿ ಭಂಡಿ ನಂಬಿಯ ಅಳಿಯ ಹಾಗೂ ಭಂಡಿ ನಂಬಿ ಸೆಟ್ಟಿ ಕುಂಜನಂಬಿ ಸೆಟ್ಟಿಯ ಅಳಿಯ ಎಂದು ವಂಶಾವಳಿಯನ್ನು ಚಿತ್ರಿಸಲಾಗಿದೆ. ಕುಂಜನಂಬಿ ಕೇರಳ ರಾಜ್ಯದ ಮೂಲದವನು. ಆತನ ಬಗ್ಗೆ ಶಾಸನೋಕ್ತಿ ಹೀಗಿದೆ; "ಚಿತ್ತ ವೃತ್ತಿಗಳನಿಚ್ಛಾ ಮಾತ್ರದಿಂ ಬಲ್ಲನೆಂಬೀ ನಿಸ್ತಾರದ ಕುಂಜನಂಬಿನೆಗಳ್ದಂ ಮಂತ್ರಾಂಗ ಸಾಮರ್ಥ್ಯಂ ವಿದ್ಯಾ ನೈಪುಣ್ಯನು ದಾರಮೇರು ಮಲೆಯಾಳ ಶ್ರೀ ಕುಳೋದ್ಧಾರಕಂ" ಎಂಬುದಾಗಿ ಆತನ ಗುಣ ವಿಶೇಷಣಗಳನ್ನು ಎತ್ತಿ ಹಿಡಿಯಲಾಗಿದೆ. ಅಷ್ಟೇಅಲ್ಲದೆ, ಈ ವಡ್ಡವ್ಯವಹಾರಿಗಳನ್ನು "ರಾಜ್ಯದೊಳುಭಯ ನಾನಾದೇಶಿ ಮಲೆಯಾಳ ಮುಖ್ಯರು ಎಂದಿದೆ. ಕೇರಳ ದೇಶಲಕ್ಷ್ಮಿ ಮುಖ ಮುಖರೆನಿಪ ಕುಳಮೂಕ ನಗರಾಧಿಷ್ಟಕರುಂ ವೈಶ್ಯಕುಳಾಭರಣರುಂ" ಇತ್ಯಾದಿಯಾಗಿ ಅವರನ್ನು ಬೇರೆಡೆಯ ವ್ಯಾಪಾರಿಗಳೆಂದು, ಮಲೆಯಾಳ ಮುಖ್ಯರೆಂದು ವರ್ಣಿಸಲಾಗಿದೆ. ಇದರಿಂದ ಚಂದವ್ವೆ ಮಲೆಯಾಳಿಗಳ ಮಾತ್ರ ಪ್ರಧಾನ ಕುಟುಂಬಕ್ಕೆ ಸೇರಿದವಳೆಂಬುದು ನಿರ್ವಿವಾದ.

ಶಾಸನದಲ್ಲಿ ಗಣಕುಮಾರಿ ಚಂದವ್ವೆಗೆ 'ವಿಭೂತಿಪಟ್ಟ' ನೀಡಿ ಗೌರವಿಸಿರುವುದನ್ನು ದಾಖಲಿಸಲಾಗಿದೆ. ವಿಭೂತಿಪಟ್ಟ ಎಂದರೆ ನಿತ್ಯಧಾರ್ಮಿಕ ಕಾರ್ಯಗಳ ಮೇಲ್ವಿಚಾರಣೆಗೆ ನೀಡಿದ ಶ್ರೇಷ್ಠ ಪಟ್ಟವೆಂದು ಪರಿಗಣಿಸ

* ಸಂ. ೪೪೩, 'ಇ' ಬ್ಲಾಕ್, ಜಯಪ್ರಕಾಶನಗರ, ಮೈಸೂರು-೫೭೦೦೦೮

ಬಹುದು. ಆದರೆ ಮಠದೆರೆ ಎಂಬ ಪದದ ಹಿನ್ನಲೆಯಲ್ಲಿ ಮಠಾಧಿಪತಿಯ ಪಟ್ಟವನ್ನು ಕೊಟ್ಟರೆಂದು ಅರ್ಥೈಸಬಹುದೇ ? ಅಥವಾ ಮುಖ್ಯ ಪುರೋಹಿತನ ಸ್ಥಾನವನ್ನು ಅನುಗ್ರಹಿಸಿದರೆಂದು ತಿಳಿಯಬಹುದೆ ? ಈ ಗುರು ಪೀಠವನ್ನು ಅಲಂಕರಿಸಲು ಚಂದವ್ವೆಗಿದ್ದ ಅರ್ಹತೆಗಳೇನು ? ಆಕೆಯ ಸಾಮರ್ಥ್ಯ, ಪಾಂಡಿತ್ಯ ಇತ್ಯಾದಿಗಳ ಬಗ್ಗೆ ಶಾಸನ ಮೌನವಾಗಿದೆ. ಹಾಗಾಗಿ ಚಂದವ್ವೆಯ ಅಂತಃಸತ್ವವನ್ನು ಅರಿಯಲು ಈ ಶಾಸನ ನೆರವಾಗುವುದಿಲ್ಲ. ಉಲ್ಲೇಖಿತ ಶಾಸನದಲ್ಲಿ ದೇವಾಲಾಯದ ಮೇಲ್ವಿಚಾರಣೆಯನ್ನು ಚಂದವ್ವೆಗೆ ವಹಿಸುವ ಸಂದರ್ಭದಲ್ಲಿ ದೋರಸಮುದ್ರದ ರಾಜಗುರು ರುದ್ರಶಕ್ತಿ, ನೂರ ಇಪ್ಪತ್ತು ಸ್ಥಾನಿಕರು ಮತ್ತು ಕುಡಗಾಚಾರಿಗಳು ಉಪಸ್ಥಿತರಿದ್ದರೆಂದೂ, ಅರಸೀಕೆರೆಯ ಮಹಾಗಣಗಳಾದ ಭೂತಜೀಯ, ಅನಂತಜೀಯ, ಮಾದಜೀಯ ಹಾಗೂ ಇತರರು "ಆ ಚಂದವ್ವೆಗೆ ವಿಭೂತಿ ಪಟ್ಟವನ್ನು ಕಟ್ಟಿ ಗಣಕುಮಾರಿತನವನುಂ ಕೊಟ್ಟು ಯಿ ಕುಂಜೇಶ್ವರ ದೇವರಸ್ಥಾನಕ್ಕೆ ಮಠದೆರೆ ಮುಖ್ಯವಾಗಿ ಸಮಸ್ತ ತೆರೆಯನುಂ ಆ ಚಂದ್ರಾರ್ಕ್ಕಂಬರ. ಸರ್ವ ಮಾನ್ಯವಾಗಿ ಧಾರೆಯನೆರೆದು ಕೊಟ್ಟರು" ಎಂದು ತಿಳಿಸಲಾಗಿದೆ. ಮಹಾಗಣಗಳಲ್ಲಿ ಸ್ತ್ರೀಯರನ್ನು ಹೆಸರಿಸಿಲ್ಲ, ಪ್ರಾಯಶಃ ಮಲೆಯಾಳಿಗಳ ಸ್ತ್ರೀ ಪರಂಪರೆಯನ್ನು ಸ್ಥಳೀಯ ಸಂಪ್ರದಾಯದಂತೆ ಶ್ರೇಷ್ಠ ಪದವಿ ಅಥವಾ ವಿಭೂತಿ ಪಟ್ಟ ನೀಡಿ ಗೌರವಿಸಿರಬಹುದು.

ಒಟ್ಟಿನಲ್ಲಿ ಮಲೆಯಾಳಿಗಳ ವಲಸೆ ಹಾಗೂ ಸ್ತ್ರೀ ಪ್ರಧಾನ ಸಾಂಸ್ಕೃತಿಕ ಅಂಶಗಳು ಅಂದು ಶಿವಶರಣರ ಸಾಮಾಜಿಕ ಸಮಾನತೆಯ ಆಂದೋಲನಕ್ಕೆ ಪ್ರೇರಣೆ ನೀಡಿತ್ತೆಂಬುದರಲ್ಲಿ ಸಂದೇಹವಿಲ್ಲ. ಹೀಗೆ ವೀರಶೈವ ಸಂಪ್ರದಾಯದಲ್ಲಿ ಮಲೆಯಾಳಿ ಸಂಸ್ಕೃತಿಯ ಪ್ರಭಾವವನ್ನು ಅರಿಯಲು ಪ್ರಸ್ತುತ ಶಾಸನ ಉತ್ತಮ ನಿದರ್ಶನವಾಗಿದೆ.